# ಕರ್ನಾಟಕ ವಿಧಾನ ಪರಿಷತ್ತು

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1316
2. ಸದಸ್ಯರ ಹೆಸರು : ಶ್ರೀ ಕೆ. ಗೋವಿಂದರಾಜ್ (ವಿಧಾನ ಸಭೆಯಿಂದ ಚುನಾಯಿತರಾದವರು)
3. ಉತ್ತರಿಸಬೇಕಾದ ದಿನಾಂಕ : 21.12.2018
4. ಉತ್ತರಿಸುವ ಸಚಿವರು : ಮಾನ್ಯ ಸಹಕಾರ ಸಚಿವರು

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ | ಮಾರುಕಟ್ಟೆಯಲ್ಲಿ ನ್ಯಾಯಯೋಚಿತ ಬೆಲೆ ದೊರೆಕಿಸಿಕೊಡಲು ರೈತರಿಗೆ ಬೇಕಾದ ಆನ್‌ಲೈನ್ ಸೇವೆ ಒದಗಿಸಲೆಂದು 04 ವರ್ಷಗಳ ಹಿಂದೆ ಎಪಿಎಂಸಿ ಪ್ರವೇಶಿಸಿದ ರೆಮ್ಸ್ ಸಂಸ್ಥೆಯ ಕಾರ್ಯವೈಖರಿಯಿಂದ ಕೋಟ್ಯಾಂತರ ರೂ. ಗಳ ನಷ್ಟವಾಗಿದ್ದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಕೃಷಿ ಮಾರಾಟ ಸುಧಾರಣೆಗಳನ್ನು ಜಾರಿಗೆ ತರಲು ಕರ್ನಾಟಕ ಸರ್ಕಾರ ಕೃಷಿ ಮಾರಾಟ ಸುಧಾರಣೆ ನೀತಿ-2013 ದೇಶದಲ್ಲಿಯೇ ಪ್ರಪ್ರಥಮವಾಗಿ ಘೋಷಿಸಲಾಯಿತು. ಕೃಷಿ ಮಾರಾಟ ವ್ಯವಸ್ಥೆಯಲ್ಲಿನ ಸಮಸ್ಯೆಗಳನ್ನು ಈಡೇರಿಸಿ ಮಾರುಕಟ್ಟೆಯಲ್ಲಿನ ವ್ಯವಹಾರದಲ್ಲಿ ಪಾರದರ್ಶಕತೆ, ದಕ್ಷತೆ ಮತ್ತು ಸರಳತೆಯನ್ನು ರೂಪಿಸಲು ಪೂರಕವಾಗುವಂತೆ ವಿಶೇಷ ಸಾಂಸ್ಥಿಕ ಸಂಸ್ಥೆಯನ್ನು ಸ್ಥಾಪಿಸಲು ಸರ್ಕಾರವು ತೀರ್ಮಾನಿಸಿರುತ್ತದೆ. ಅದರಂತೆ, ಕರ್ನಾಟಕ ಸರ್ಕಾರ ಮತ್ತು ಎನ್‌ಸಿಡಿಇಎಕ್ಸ್ ಇ ಮಾರ್ಕೆಟ್ಸ್ ಲಿಮಿಟೆಡ್ (ಎನ್‌ಇಎಂಎಲ್) ಸಹಭಾಗಿತ್ವದಲ್ಲಿ ತಲಾ ಶೇಕಡಾ 50%ರಷ್ಟು ಷೇರುಗಳ ಅನುಪಾತದೊಂದಿಗೆ ರಾಷ್ಟ್ರೀಯ ಇ-ಮಾರ್ಕೆಟ್ ಸರ್ವಿಸಸ್ ಪ್ರೈವೇಟ್ ಲಿಮಿಟೆಡ್ (ರೆಮ್ಸ್) ಸಂಸ್ಥೆಯನ್ನು ಸರ್ಕಾರ ಸ್ಥಾಪಿಸಿದೆ.<br><br>ಮಾರುಕಟ್ಟೆಗಳ ಆಧುನಿಕರಣಕ್ಕೆ ಅವಶ್ಯಕವಾಗುವಂತಹ ತಂತ್ರಜ್ಞಾನ ಅಳವಡಿಸಲು ಮತ್ತು ರೈತರ ಉತ್ಪನ್ನಗಳಿಗೆ ಸ್ಪರ್ಧಾತ್ಮಕ ಬೆಲೆ ದೊರಕಿಸುವುದು ಸರ್ಕಾರದ ವಿಶೇಷ ಸಾಂಸ್ಥಿಕ ಸಂಸ್ಥೆಯ ಉದ್ದೇಶವಾಗಿರುತ್ತದೆ. ನಿಕಟ ಪೂರ್ವ ಸನ್ಮಾನ್ಯ ಮುಖ್ಯಮಂತ್ರಿಯವರು 22ನೇ ಫೆಬ್ರವರಿ 2014 ರಂದು ಮೂರು ಎಪಿಎಂಸಿಗಳಲ್ಲಿ ಏಕೀಕೃತ ಮಾರುಕಟ್ಟೆ ವೇದಿಕೆಯ ಆನ್‌ಲೈನ್ ವ್ಯಾಪಾರ ವಹಿವಾಟಿಗೆ ಚಾಲನೆ ನೀಡಿರುತ್ತಾರೆ. |

ಕೃಷಿ ಮಾರುಕಟ್ಟೆ ಸುಧಾರಣೆ ಹಾಗೂ ರೆಮ್ಸ್ ಸಂಸ್ಥೆಯ ನಿರ್ವಹಣೆಗಾಗಿ ಸರ್ಕಾರದ ಉನ್ನತ ಮಟ್ಟದ ಅಧಿಕಾರಸ್ಥ ಸಮಿತಿಯನ್ನು (Empowered Committee) ರಚಿಸಲಾಗಿದೆ. ಸದರಿ ಸಮಿತಿಗೆ ಮುಖ್ಯ ಕಾರ್ಯದರ್ಶಿಯವರು ಅಧ್ಯಕ್ಷರಾಗಿದ್ದು, ಹಣಕಾಸು ಇಲಾಖೆಯ ಪ್ರಧಾನ ಕಾರ್ಯದರ್ಶಿ, ಸಹಕಾರ ಇಲಾಖೆಯ ಪ್ರಧಾನ ಕಾರ್ಯದರ್ಶಿ, ಕೃಷಿ ಇಲಾಖೆಯ ಪ್ರಧಾನ ಕಾರ್ಯದರ್ಶಿ ಹಾಗೂ ಸಹಕಾರ ಇಲಾಖೆಯ ಅಪರ ಕಾರ್ಯದರ್ಶಿಯವರು ಸದಸ್ಯರಾಗಿರುತ್ತಾರೆ. ಸಂಸ್ಥೆಯ ನಿರ್ವಹಣೆ ಹಾಗೂ ಅಗತ್ಯ ಮಾರ್ಗಸೂಚಿಗಳನ್ನು ಕಾಲಕಾಲಕ್ಕೆ ನೀಡುತ್ತಿದೆ ಮತ್ತು ವಹಿವಾಟು ವೆಚ್ಚದ ದರಗಳನ್ನು ಅಧಿಕಾರಸ್ಥ ಸಮಿತಿಯು ನಿರ್ಧರಿಸುತ್ತದೆ.

ರೆಮ್ಸ್ ಸಂಸ್ಥೆಯು, ಎಪಿಎಂಸಿಗಳಿಂದ ಸಂಗ್ರಹವಾದ ವಹಿವಾಟು ಶುಲ್ಕದ ಬಾಬ್ತಿನಲ್ಲಿ, ಸಂಸ್ಥೆಯ ಒಟ್ಟು ವೆಚ್ಚದಲ್ಲಿ ಶೇಕಡಾ 73.42%, 74.73% ಮತ್ತು 64.38% ರಷ್ಟು 2015-16, 2016-17 ಮತ್ತು 2017-18ರ ಸಾಲಿನಲ್ಲಿ ಕೃಷಿ ಮಾರುಕಟ್ಟೆ ಸುಧಾರಣೆ ಪ್ರಕ್ರಿಯೆಗಳ ಅನುಷ್ಠಾನಕ್ಕೆ ವೆಚ್ಚ ಗಳಿಗಾಗಿ ಕೃಷಿ ಮಾರಾಟ ಮಂಡಳಿಗೆ/ ಮಾರುಕಟ್ಟೆಗಳಿಗೆ ಹಿಂದಿರುಗಿಸಿದೆ.

ರೆಮ್ಸ್ ಸಂಸ್ಥೆ ಹಿಂದಿರುಗಿಸಿದ ಹಣದಿಂದ ಈ ಕೆಳಕಂಡ ಕಾರ್ಯಗಳಿಗೆ ವೆಚ್ಚ ಮಾಡಲಾಗಿದೆ- ಗಣಕಯಂತ್ರ, ಮುದ್ರಣಯಂತ್ರ, ಸ್ಕ್ಯಾನರ್ಸ್, ರೋಟರ್ಸ್, ಎಪಿಎಂಸಿಗಳಲ್ಲಿ ಡಾಟಾಎಂಟ್ರಿ ಆಪರೇಟರ್‌ಗಳ ವೇತನ, ಮಾಹಿತಿ ಪ್ರಸಾರ ವೆಚ್ಚ, ಕಿಯೋಸ್ಕ್‌ಗಳ ಖರೀದಿ ವೆಚ್ಚ, ಮಾರುಕಟ್ಟೆಗಳಲ್ಲಿನ ಅಂತರ್ಜಾಲ ಸೌಲಭ್ಯದ ವೆಚ್ಚ, ಟ್ಯಾಬ್ಲೆಟ್ ಖರೀದಿ ವೆಚ್ಚ, ರೈತ ನೋಂದಣಿ ವೆಚ್ಚ, ರೈತ ಶಿಕ್ಷಣ ಮತ್ತು ಭಾಗೀದಾರರ ಸಭೆಗಳ ವೆಚ್ಚ, ಉತ್ಪನ್ನಗಳ ಗುಣವಿಶ್ಲೇಷಣೆ ಘಟಕಗಳ ಸ್ಥಾಪನೆ, ಗುಣ ವಿಶ್ಲೇಷಣಾ ವೆಚ್ಚ.

ರೆಮ್ಸ್ ಸಂಸ್ಥೆಯ ಕಾರ್ಯವೈಖರಿಯಿಂದ ಸರ್ಕಾರಕ್ಕೆ ಯಾವುದೇ ನಷ್ಟವು ಸಂಭವಿಸಿರುವುದಿಲ್ಲ.

| | | |
|---|---|---|
| ಆ | ದಲ್ಲಾಲಿಗಳ ಕಾಟವನ್ನುತಪ್ಪಿಸಲು ಸರ್ಕಾರದ ನೆರವಿನಿಂದ ಎಪಿಎಂಸಿ ಪ್ರವೇಶಿಸಿದ ರೆಮ್ಸ್ ಸಂಸ್ಥೆಯು ಸರ್ಕಾರ ಪರವಾನಿಗೆ ಪಡೆದಿರುವ ಮತ್ತೊಂದು ದಲ್ಲಾಳಿ ಸಂಸ್ಥೆ ಯಾಗಿರುವುದನ್ನು ಸರ್ಕಾರ ಗಮನಿಸಿದೆಯೇ; | ಕೃಷಿ ಮಾರುಕಟ್ಟೆಗಳಲ್ಲಿ ಇರುವ ನ್ಯೂನತೆಗಳನ್ನು ಸುಧಾರಿಸಲು, ಕಾರ್ಯಸಮರ್ಥನೆ, ಪಾರದರ್ಶಕತೆ, ದಕ್ಷತೆ ಮತ್ತು ಸ್ಪರ್ಧೆಯನ್ನು ಹೆಚ್ಚಿಸಲು ಸರ್ಕಾರದ ಮುಖ್ಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ರೆಮ್ಸ್ ಸಂಸ್ಥೆಯನ್ನು ಸ್ಥಾಪಿಸಲಾಗಿದೆ.<br><br>ರೆಮ್ಸ್ ಸಂಸ್ಥೆಯು, ರಾಜ್ಯದ ಎಪಿಎಂಸಿ ಗಳಲ್ಲಿ ಏಕೀಕೃತ ಮಾರುಕಟ್ಟೆ ವೇದಿಕೆ ಸ್ಥಾಪಿಸಿ, ಎಲ್ಲಾ ಮಾರುಕಟ್ಟೆಗಳನ್ನು ಜೋಡಣೆ ಮಾಡಿ, ವರ್ತಕರು ಎಲ್ಲಿಂದಲಾದರು ರೈತರ ಉತ್ಪನ್ನಗಳನ್ನು ಆನ್‌ಲೈನ್ ಮೂಲಕ ಬಿಡ್ ಮಾಡುವ ವ್ಯವಸ್ಥೆಯನ್ನು ಕಲ್ಪಿಸಿದೆ. |
| ಇ | ಆನ್‌ಲೈನ್ ಟ್ರೇಡಿಂಗ್ ಹೆಸರಿನಲ್ಲಿ ಪ್ರತಿ ತಿಂಗಳು ರೆಮ್ಸ್ ಎಂಬ ಖಾಸಗಿ ಸಂಸ್ಥೆಗೆ ಕೋಟಿಗಟ್ಟಲೆ ಕಮೀಷನ್ ಹೋಗುತ್ತಿರುವುದರಿಂದ ಸರ್ಕಾರಕ್ಕೆ ಆಗಿರುವ ನಷ್ಟವೆಷ್ಟು; | ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ (ನಿಯಂತ್ರಣ ಮತ್ತು ಅಭಿವೃದ್ಧಿ) ನಿಯಮಗಳು 1968 ನಿಯಮ 2(vii-ಎ) ರಂತೆ ವಹಿವಾಟು ಶುಲ್ಕದ ವ್ಯಾಖ್ಯಾನ ವಿದ್ಯುನ್ಮಾನ ವೇದಿಕೆಯ ಮುಖಾಂತರ ಮಾರಾಟ ಮಾಡುವಂತಹ ಸರಕುಗಳ ಮೌಲ್ಯದ ಮೇಲೆ ಖರೀದಿದಾರನಿಂದ ಸಂಗ್ರಹಿಸಲಾಗುವ ದರಗಳು ಮತ್ತು ಇದು ವಿದ್ಯುನ್ಮಾನ ವೇದಿಕೆಯಲ್ಲಿ ವಹಿವಾಟು ಮಾಡಲಾಗುವ ಪ್ರತಿ 100 ರೂಪಾಯಿಗಳ ಸರಕಿಗೆ 20 ಪೈಸೆಗಳನ್ನು ಮೀರತಕ್ಕದ್ದಲ್ಲ ಎಂದಿರುತ್ತದೆ.<br>ಅಧಿಕಾರಸ್ಥ ಸಮಿತಿಯ ಶಿಫಾರಸ್ಸಿನಂತೆ ಪ್ರಸ್ತುತ ಸರ್ಕಾರದ ದಿನಾಂಕ:25-03-2017ರ ಆದೇಶದಂತೆ ಪ್ರತಿ 100 ರೂಪಾಯಿಗಳ ಸರಕಿಗೆ 10 ಪೈಸೆಯನ್ನು ರೆಮ್ಸ್ ಸಂಸ್ಥೆಗೆ ವಹಿವಾಟು ಶುಲ್ಕವಾಗಿ ಪಾವತಿಸಲು ಆದೇಶವಿರುತ್ತದೆ. ಅದರಂತೆ ಸಮಿತಿಗಳು ವಹಿವಾಟು ಶುಲ್ಕ ಪಾವತಿಸುತ್ತಿವೆ ಹಾಗೂ ರೆಮ್ಸ್ ಸಂಸ್ಥೆಯು ಸಂಗ್ರಹಿಸುವ ವಹಿವಾಟು ವೆಚ್ಚದ ಮೊತ್ತದಲ್ಲಿ ಬಹುಪಾಲನ್ನು ಸಮಿತಿಗಳಲ್ಲಿ ಏಕೀಕೃತ ಮಾರಾಟ ವೇದಿಕೆ ಹಾಗೂ ಇತರೆ ಪೂರಕ ಚಟುವಟಿಕೆಗೆ ವಿನಿಯೋಗಿಸಿರುವುದರಿಂದ ಸರ್ಕಾರಕ್ಕೆ ನಷ್ಟವಾಗುವ ಪ್ರಮೇಯ ಉದ್ಭವವಾಗುವುದಿಲ್ಲ. |
| ಈ | ರೈತರಿಂದ ಸಂಗ್ರಹಿಸುವ ಮಾರುಕಟ್ಟೆ ಶುಲ್ಕ ಮತ್ತುಆವರ್ತನಿಧಿ ಶುಲ್ಕವನ್ನುರೈತಕಲ್ಯಾಣಕ್ಕೆ ಅಷ್ಟೇ ಬಳಸದೇ ಅನ್ಯಕಾರಣಕ್ಕೆ ಬಳಕೆಯಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ? | ರೈತರಿಂದ ಮಾರುಕಟ್ಟೆ ಶುಲ್ಕ ಸಂಗ್ರಹಿಸುವುದಿಲ್ಲ. ಕಾಯ್ದೆ ಮತ್ತು ನಿಯಮಗಳನ್ವಯ ಉತ್ಪನ್ನಗಳ ಖರೀದಿದಾರರಿಂದ ಮಾರುಕಟ್ಟೆ ಶುಲ್ಕ ಸಂಗ್ರಹಿಸಲಾಗುತ್ತಿದೆ.<br><br>ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ (ನಿಯಂತ್ರಣ ಮತ್ತುಅಭಿವೃದ್ಧಿ) ಕಾಯ್ದೆ 1966 ಹಾಗೂ ನಿಯಮಗಳು 1968 ಗಳಲ್ಲಿ ಅವಕಾಶಿಸಿದಂತೆ ಮಾರುಕಟ್ಟೆ ಶುಲ್ಕ ಮತ್ತು ಆವರ್ತ ನಿಧಿ ಮೊತ್ತವನ್ನು ವೆಚ್ಚ ಮಾಡಲಾಗುತ್ತಿದೆ. |

| | | |
|---|---|---|
| ಉ | ರಾಜ್ಯದ ಕೆಲವು ಜಿಲ್ಲೆಗಳಲ್ಲಿ ಇ ಟೆಂಡರ್ ನಡೆಯದೆ ರೆಮ್ಸ್ ಸಂಸ್ಥೆಯ ಉಪಯೋಗವಿಲ್ಲದಿರುವುದನ್ನು ಹಾಗೂ ಈ ಜಿಲ್ಲೆಗಳಲ್ಲಿ ಇ ಪರ್ಮಿಟ್ ಕೊಡುವುದಕ್ಕೆ ಮಾತ್ರ ರೆಮ್ಸ್ ಸಂಸ್ಥೆ ಸೀಮಿತವಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ರೆಮ್ಸ್ ಸಂಸ್ಥೆ ಕಾರ್ಯನಿರ್ವಹಣೆ ಇ-ಪರ್ಮಿಟ್ ವ್ಯವಸ್ಥೆಗೆ ಮಾತ್ರ ಸೀಮಿತವಾಗಿಲ್ಲ. ಕೆಲವು ಮಾರುಕಟ್ಟೆಗಳಲ್ಲಿ ಇ-ಟೆಂಡರ್ ನಡೆಯದಿದ್ದರೂ ಸರಕುಪಟ್ಟಿ, ಮಾರುಕಟ್ಟೆ ಶುಲ್ಕ ಗಣಕೀಕರಣ, ಲೆಕ್ಕ ತಿರುವಳಿ ಪಟ್ಟಿ, ಏಕೀಕೃತ ಮಾರುಕಟ್ಟೆ ವೇದಿಕೆಯಡಿ ಡಿಸಿಬಿ ವರದಿ ಸಿದ್ಧಪಡಿಸುವುದು, ಮಾರುಕಟ್ಟೆ ಎಲ್ಲಾ ವಹಿವಾಟುಗಳ ದತ್ತಾಂಶ ಶೇಖರಣೆ ಮತ್ತು ವಿಶೇಷವಾಗಿ ಏಕೀಕೃತ ಮಾರುಕಟ್ಟೆ ವೇದಿಕೆಗೆ ಮೀಸಲಾದ ಸರ್ವರ್‌ಗಳ ನಿರ್ವಹಣೆ ಕಾರ್ಯಗಳು ಇರುತ್ತದೆ. |
| ಊ | ಹಲವಾರು ಜಿಲ್ಲೆಗಳಲ್ಲಿ ಆನ್‌ಲೈನ್ ಟ್ರೇಡಿಂಗ್ ನಡೆಯದಿದ್ದರೂ ಸಹ ಗುತ್ತಿಗೆ ಒಪ್ಪಂದದ ಪ್ರಕಾರ ಪ್ರತಿ ವಹಿವಾಟಿಗೆ 10 ಪೈಸೆ ಶುಲ್ಕ ಪಾವತಿಸಿ ಖಾಸಗಿ ಸಂಸ್ಥೆಗೆ ಸಹಾಯ ಮಾಡುವುದನ್ನು ತಪ್ಪಿಸಲು ಸರ್ಕಾರ ಏನಾದರೂ ಕ್ರಮ ಕೈಗೊಳ್ಳುವುದೇ? | ವಹಿವಾಟು ವೆಚ್ಚದ ದರಗಳನ್ನು ಅಧಿಕಾರಸ್ಥ ಸಮಿತಿಯು ನಿರ್ಧರಿಸುತ್ತದೆ. ಆನ್‌ಲೈನ್ ವೇದಿಕೆಯಲ್ಲಿ ವಹಿವಾಟಾಗುವ ಉತ್ಪನ್ನಗಳ ಮೇಲೆ ವಸೂಲಾಗುವ ಮಾರುಕಟ್ಟೆ ಶುಲ್ಕ ಆಧಾರದ ಮೇಲೆ ಮಾತ್ರ ವಹಿವಾಟು ಶುಲ್ಕ ಆಕರಿಸಲು ಅವಕಾಶವಿದ್ದು ಆದರಂತೆ ರೆಮ್ಸ್ ಸಂಸ್ಥೆಯು ವಹಿವಾಟು ಶುಲ್ಕ ಆಕರಿಸುತ್ತಿದೆ ಸರ್ಕಾರದ ಕೈಗಾರಿಕಾ ನೀತಿ ಮೇರೆಗೆ ಕೆಲವು ಕೃಷಿ ಉತ್ಪನ್ನ ಉದ್ದಿಮೆಗಳನ್ನು ಪ್ರೋತ್ಸಾಹಿಸಲು ಮಾರುಕಟ್ಟೆ ಶುಲ್ಕದ ವಿನಾಯಿತಿ ನೀಡಲಾಗಿದೆ. ಇಂತಹ ವಹಿವಾಟುಗಳಿಗೆ ಸಂಬಂಧಿಸಿದಂತೆ ಯಾವುದೇ ರೀತ್ಯಾ ವಹಿವಾಟು ಶುಲ್ಕವನ್ನು ಎಪಿಎಂಸಿಗಳು ರೆಮ್ಸ್ ಸಂಸ್ಥೆಗೆ ನೀಡುವುದಿಲ್ಲ. ಯಾವುದೇ ವಹಿವಾಟು ವೆಚ್ಚ ದೊರಕದಿದ್ದರು ಸಹ ರೆಮ್ಸ್ ಇಂತಹ ವಹಿವಾಟುಗಳನ್ನು ಏಕೀಕೃತ ಮಾರುಕಟ್ಟೆ ವೇದಿಕೆಯಲ್ಲಿ ನಿರ್ವಹಿಸುತ್ತಿದೆ. ಇದೇ ರೀತಿ, ಮಾರುಕಟ್ಟೆ ಶುಲ್ಕ ರಿಯಾಯಿತಿ ಇರುವ ಸಂಸ್ಥೆಗಳ ವಹಿವಾಟಿನ ಮೇಲೆ ಮಾರುಕಟ್ಟೆ ಶುಲ್ಕದ ಅನುಗುಣವಾಗಿ ಭಾಗಶ: ವಹಿವಾಟು ವೆಚ್ಚವನ್ನು ನೀಡುತ್ತವೆ ಹಾಗೂ ಹಣ್ಣು ಮತ್ತು ತರಕಾರಿ ಮಾರುಕಟ್ಟೆಗಳಲ್ಲಿ ಮಾರುಕಟ್ಟೆ ಶುಲ್ಕ ಅನ್ವಯಿಸುವುದಿಲ್ಲ. ಇದಕ್ಕೆ ರೆಮ್ಸ್ ಸಂಸ್ಥೆ ನೀಡುವ ಸೇವೆಗಳು ಶುಲ್ಕ ರಹಿತವಾಗಿವೆ. ವಹಿವಾಟು ವೆಚ್ಚದ ಮೊತ್ತದಲ್ಲಿ ಬಹು ಸಮಿತಿಗಳಲ್ಲಿ ಏಕೀಕೃತ ಮಾರಾಟ ವೇದಿಕೆ ನಿರ್ವಹಣೆ ಹಾಗೂ ಇತರೆ ಪೂರಕ ಚಟುವಟಿಕೆಗೆ ವಿನಿಯೋಗಿಸಲಾಗುತ್ತಿದೆ. |

ಸಂಖ್ಯೆ: ಸಇ 527 ಎಂಆರ್‌ಇ 2018

(ಬಂಡೆಪ್ಪ ಖಾಶೆಂಪೂರ)
ಸಹಕಾರ ಸಚಿವರು.